# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ)

ಹದಿನೈದನೇ ಅಧಿವೇಶನ

## ಕಾರ್ಯಕಲಾಪಗಳ ಪಟ್ಟಿ

ಸೋಮವಾರ, ದಿನಾಂಕ 13ನೇ ಫೆಬ್ರವರಿ, 2023

(ಸಮಯ: ಬೆಳಿಗ್ಗೆ 11.00 ಗಂಟೆಗೆ)

----

### 1. ಸಂತಾಪ ಸೂಚನೆ

### 2. ಪ್ರಶ್ನೋತ್ತರ

ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಒಂದನೇ ಪಟ್ಟಿ

ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಒಂದನೇ ಪಟ್ಟಿ

### 3. ಕಾರ್ಯದರ್ಶಿಯವರ ವರದಿ

**ಕಾರ್ಯದರ್ಶಿಯವರು:-**

ಕಳೆದ ಅಧಿವೇಶನದಲ್ಲಿ ವರದಿಯನ್ನು ಒಪ್ಪಿಸಿದ ನಂತರ ರಾಜ್ಯಪಾಲರಿಂದ ಒಪ್ಪಿಗೆ ಪಡೆದ ವಿಧೇಯಕಗಳ ಪಟ್ಟಿಯನ್ನು ಸಭೆಯ ಮುಂದೆ ಮಂಡಿಸುವುದು.

### 4. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

ಮಾನ್ಯ ಸದಸ್ಯರುಗಳಿಗೆ ಪ್ರತ್ಯೇಕವಾಗಿ ಕಳುಹಿಸಲಾಗಿರುವ ಮೊದಲನೇ ಮತ್ತು ಎರಡನೇ ಪಟ್ಟಿ ರೀತ್ಯಾ.

## 5. ರಾಜ್ಯಪಾಲರ ಭಾಷಣಕ್ಕೆ ಸಂಬಂಧಿಸಿದ ವಂದನಾರ್ಪಣಾ ಪ್ರಸ್ತಾವ

"ದಿನಾಂಕ 10ನೇ ಫೆಬ್ರವರಿ, 2023ರ ಶುಕ್ರವಾರದಂದು ವಿಧಾನಮಂಡಲದ ಉಭಯ ಸದನಗಳ ಸದಸ್ಯರುಗಳನ್ನುದ್ದೇಶಿಸಿ ದಯಪಾಲಿಸಿದ ಭಾಷಣಕ್ಕಾಗಿ ಈ ಅಧಿವೇಶನದಲ್ಲಿ ಸೇರಿರುವ ವಿಧಾನಸಭೆಯ ಸದಸ್ಯರಾದ ನಾವು ಮಾನ್ಯ ರಾಜ್ಯಪಾಲರವರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸಲು ಅಪ್ಪಣೆ ಕೋರುತ್ತೇವೆ"

ಎಂದು **ಶ್ರೀ ಸಿ.ಟಿ. ರವಿ** ಅವರು ಸೂಚಿಸುವುದು;

**ಶ್ರೀ ಪಿ. ರಾಜೀವ್** ಅವರು ಅನುಮೋದಿಸುವುದು.

## 6. ಗಮನ ಸೆಳೆಯುವ ಸೂಚನೆಗಳು

1) **ಶ್ರೀ ಈ. ತುಕಾರಾಮ್ ಅವರು** – ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕಿನ ಕುಡುತಿನಿಯಲ್ಲಿ ಕಾರ್ಖಾನೆಗಳನ್ನು ಸ್ಥಾಪಿಸಲು ಕೆ.ಐ.ಎ.ಡಿ.ಬಿ. ವತಿಯಿಂದ ಕಂಪನಿಗಳಿಗೆ ನೀಡಿರುವ ರೈತರ ಮತ್ತು ಸರ್ಕಾರಿ ಭೂಮಿಯನ್ನು ಉಪಯೋಗಿಸದಿರುವುದರಿಂದ ಸದರಿ ಭೂಮಿಯನ್ನು ಅವರಿಂದ ಹಿಂಪಡೆದು ಕಾರ್ಖಾನೆಯನ್ನು ಸ್ಥಾಪಿಸಲು ಬೇರೆಯವರಿಗೆ ಅನುವು ಮಾಡಿಕೊಡಲು ಅಥವಾ ರೈತರಿಗೆ ಹಿಂದಿರುಗಿಸಿ ಕೃಷಿ ಚಟುವಟಿಕೆಗಳಿಗೆ ಅನುಕೂಲ ಮಾಡಿಕೊಡುವ ಬಗ್ಗೆ ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರ ಗಮನ ಸೆಳೆಯುವುದು.

2) **ಶ್ರೀ ಸಿ.ಎನ್. ಬಾಲಕೃಷ್ಣ ಅವರು** – ಶ್ರವಣಬೆಳಗೊಳ ವಿಧಾನಸಭಾ ಕ್ಷೇತ್ರದಲ್ಲಿ ಕಾರೇಹಳ್ಳಿ ಪೊಲೀಸ್ ಉಪ ಠಾಣೆಯು ಶಿಥಿಲಾವಸ್ಥೆಯಲ್ಲಿರುವುದರಿಂದ ನೂತನ ಪೊಲೀಸ್ ಉಪ ಠಾಣೆಯನ್ನು ಮಂಜೂರು ಮಾಡುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

3) **ಶ್ರೀ ರಾಜಾ ವೆಂಕಟಪ್ಪ ನಾಯಕ್ ಅವರು** – ಮಾನ್ವಿ ವಿಧಾನಸಭಾ ಕ್ಷೇತ್ರದ ಸಿರವಾರ ಪಟ್ಟಣದಲ್ಲಿ ತಾಲ್ಲೂಕು ಕ್ರೀಡಾಂಗಣ ನಿರ್ಮಾಣಕ್ಕಾಗಿ ಕರ್ನಾಟಕ ನೀರಾವರಿ ನಿಗಮದಿಂದ ಜಮೀನನ್ನು ಯುವ ಸಬಲೀಕರಣ, ಕ್ರೀಡಾ ಇಲಾಖೆಗೆ ಪಡೆಯಲು ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ರೇಷ್ಮೆ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರ ಗಮನ ಸೆಳೆಯುವುದು.

4) **ಡಾ. ಅಜಯ ಧರ್ಮಸಿಂಗ್ ಅವರು** – ಜೇವರ್ಗಿ ಪಟ್ಟಣದಲ್ಲಿ ಅಪೂರ್ಣಗೊಂಡಿರುವ ಅಲ್ಪಸಂಖ್ಯಾತರ ಸಮುದಾಯ ಭವನ ಕಟ್ಟಡ ಕಾಮಗಾರಿಯನ್ನು ಪೂರ್ಣಗೊಳಿಸಲು ಅವಶ್ಯವಿರುವ ಅನುದಾನ ಬಿಡುಗಡೆ ಮಾಡುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

..3/

5) **ಶ್ರೀ ಟಿ.ಡಿ. ರಾಜೇಗೌಡ ಅವರು** – ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ತಾಲ್ಲೂಕಿನಲ್ಲಿರುವ ಸಾರ್ವಜನಿಕ ಆಸ್ಪತ್ರೆಯನ್ನು 100 ಹಾಸಿಗೆಗಳ ಆಸ್ಪತ್ರೆಯನ್ನಾಗಿ ಹಾಗೂ ಬಾಳೆಹೊನ್ನೂರು ಪ್ರಾಥಮಿಕ ಆರೋಗ್ಯ ಕೇಂದ್ರವನ್ನು 50 ಹಾಸಿಗೆಗಳ ಸಮುದಾಯ ಆರೋಗ್ಯ ಕೇಂದ್ರವನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರ ಗಮನ ಸೆಳೆಯುವುದು.

6) **ಶ್ರೀ ದೇವಾನಂದ ಫುಲಸಿಂಗ್ ಚವ್ಹಾಣ್ ಅವರು** – ನೂತನ ತಾಲ್ಲೂಕು ಕೇಂದ್ರವಾಗಿ ರಚನೆಯಾಗಿರುವ ಚಡಚಣ ಪಟ್ಟಣದಲ್ಲಿ ಅಗ್ನಿಶಾಮಕ ಠಾಣೆಯನ್ನು ಸ್ಥಾಪಿಸುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

7) **ಶ್ರೀ ರವೀಂದ್ರ ಶ್ರೀಕಂಠಯ್ಯ ಅವರು** – ಶ್ರೀರಂಗಪಟ್ಟಣ ವಿಧಾನಸಭಾ ವ್ಯಾಪ್ತಿಯಲ್ಲಿನ ಗಾಮನಹಳ್ಳಿ ಸೇರಿದಂತೆ ಇತರೆ ಹಳ್ಳಿಗಳಿಗೆ ಮಂಜೂರಾಗಿರುವ ಕುಡಿಯುವ ನೀರಿನ ಯೋಜನೆಗೆ ಪೈಪ್‌ಲೈನ್ ಅಳವಡಿಸಲು ಸಲ್ಲಿಸಿರುವ ಪ್ರಸ್ತಾವನೆಗೆ ಅರಣ್ಯ ಇಲಾಖೆಯಿಂದ ಅನುಮತಿ ದೊರಕದೆ ಇರುವುದರಿಂದ ಸಾರ್ವಜನಿಕರಿಗೆ ಕುಡಿಯುವ ನೀರಿನ ಸಮಸ್ಯೆಯಾಗುತ್ತಿರುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

8) **ಶ್ರೀ ಎಂ.ವೈ. ಪಾಟೀಲ ಅವರು** – ಅಫಜಲಪುರ ವಿಧಾನಸಭಾ ವ್ಯಾಪ್ತಿಯಲ್ಲಿರುವ ಕಲಬುರಗಿ ತಾಲ್ಲೂಕಿನ ಫರತಾಬಾದ್ ಹೋಬಳಿಯ ಕವಲಗಾ (ಕೆ) ಗ್ರಾಮಕ್ಕೆ ಹೊಸದಾಗಿ ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಮಂಜೂರು ಮಾಡುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರ ಗಮನ ಸೆಳೆಯುವುದು.

9) **ಡಾ. ಕೆ. ಅನ್ನದಾನಿ ಅವರು** – ಮಳವಳ್ಳಿ ತಾಲ್ಲೂಕಿನ ಬಿ.ಜಿ.ಪುರ ಹೋಬಳಿಯ ಪೂರಿಗಾಲಿ ಏತ ನೀರಾವರಿ ಯೋಜನೆಯನ್ನು ಲೋಕಾರ್ಪಣೆಗೊಳಿಸುವ ಬಗ್ಗೆ ಮಾನ್ಯ ಜಲಸಂಪನ್ಮೂಲ ಸಚಿವರ ಗಮನ ಸೆಳೆಯುವುದು.

10) **ಶ್ರೀ ಕೆ. ಮಹದೇವ ಅವರು** – ರಾಜ್ಯದಲ್ಲಿ ಐದು ಎಕರೆಗಿಂತ ಹೆಚ್ಚಿನ ಜಮೀನು ಹೊಂದಿರುವ ರೈತರಿಂದ ಎಂ.ಎಸ್.ಪಿ. ದರದಲ್ಲಿ ರಾಗಿ ಖರೀದಿಸುವ ಮೂಲಕ ರಾಗಿ ಖರೀದಿ ನಿಗದಿತ ಗುರಿ ತಲುಪಲು ಹಾಗೂ ರೈತರಿಗೆ ಅನುಕೂಲ ಮಾಡಿಕೊಡುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

**ಎಂ.ಕೆ.ವಿಶಾಲಾಕ್ಷಿ**
**ಕಾರ್ಯದರ್ಶಿ**

---

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ಅಂತರ್ಜಾಲದ ಈ ವಿಳಾಸದಲ್ಲಿ ಪಡೆದುಕೊಳ್ಳಬಹುದು
***http://kla.kar.nic.in/assembly/lob/lob.htm***